# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 545 |
| ಸದಸ್ಯರ ಹೆಸರು | : | ಶ್ರೀ ಬಿ.ಕೆ. ಹರಿಪ್ರಸಾದ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವವರು | : | ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಹಾಗೂ ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 11-12-2020 |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ. | ರಾಜ್ಯದಲ್ಲಿ ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳ ಸಂಖ್ಯೆ ಎಷ್ಟು; ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಜಿಲ್ಲಾವಾರು ಮಾಹಿತಿ ಒದಗಿಸುವುದು) | ರಾಜ್ಯದಲ್ಲಿ ಅಂಗನವಾಡಿ ಕೇಂದ್ರದ 7660 ಮಕ್ಕಳು ತೀವ್ರ ಅಪೌಷ್ಟಿಕತೆಯಿಂದ ಹಾಗೂ 461235 ಮಕ್ಕಳು ಸಾಧಾರಣ ಅಪೌಷ್ಟಿಕತೆಯಿಂದ ಬಳಲುತ್ತಿರುತ್ತವೆ.<br><br>ಜಿಲ್ಲಾವಾರು ಮಾಹಿತಿಯನ್ನು ಅನುಬಂಧದಲ್ಲಿ ಒದಗಿಸಿದೆ<br><br>ಅಪೌಷ್ಟಿಕತೆಯನ್ನು ಹೋಗಲಾಡಿಸಲು ಸರ್ಕಾರವು ಈ ಕೆಳಕಂಡ ಕ್ರಮಗಳನ್ನು ಕೈಗೊಂಡಿರುತ್ತದೆ.<br><br>ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಡಿ ಪೂರಕ ಪೌಷ್ಟಿಕ ಆಹಾರವನ್ನು ಸಾಮಾನ್ಯ ಮಕ್ಕಳಿಗೆ ಪ್ರತಿ ದಿನ ಘಟಕ ವೆಚ್ಚ ರೂ.8.00/-ರಂತೆ ಹಾಗೂ ತೀವ್ರ ಅಪೌಷ್ಟಿಕತೆಯುಳ್ಳ ಮಕ್ಕಳಿಗೆ ಘಟಕ ವೆಚ್ಚ ರೂ.12.00ರಂತೆ ನೀಡಲಾಗುತ್ತಿದೆ.<br><br>• 3 ರಿಂದ 6 ವರ್ಷದ ಎಲ್ಲಾ ಮಕ್ಕಳಿಗೆ ವಾರದಲ್ಲಿ 2 ದಿನ ಮೊಟ್ಟೆ ನೀಡಲಾಗುತ್ತಿದೆ.<br><br>• 6 ತಿಂಗಳಿಂದ 6 ವರ್ಷದ ಮಕ್ಕಳಿಗೆ ವಾರದಲ್ಲಿ 5 ದಿನ 150 ಎಂ.ಎಲ್. ಕೆನೆಭರಿತ ಹಾಲು ನೀಡಲಾಗುತ್ತಿದೆ.<br><br>• ಅತಿ ಕಡಿಮೆ ತೂಕವುಳ್ಳ ಮಕ್ಕಳಿಗೆ ಹೆಚ್ಚುವರಿಯಾಗಿ ವಾರದಲ್ಲಿ 3 ದಿನ ಮೊಟ್ಟೆ ಹಾಗೂ 200 ಎಂ.ಎಲ್. ಹಾಲು ನೀಡಲಾಗುತ್ತಿದೆ. ಮೊಟ್ಟೆ ಉಪಯೋಗಿಸದ ಮಕ್ಕಳಿಗೆ ವಾರದಲ್ಲಿ 6 ದಿನ 200 ಎಂ.ಎಲ್.ಕೆನೆಭರಿತ ಹಾಲನ್ನು ನೀಡಲಾಗುತ್ತಿದೆ.<br><br>• ಹಿಂದುಳಿದ ಕಲ್ಬುರ್ಗಿ, ಬೀದರ್, ರಾಯಚೂರು, ಕೊಪ್ಪಳ ಹಾಗೂ ಯಾದಗಿರಿ ಸಾಧಾರಣ ಅಪೌಷ್ಟಿಕ ಮಕ್ಕಳಿಗೆ ಹೆಚ್ಚುವರಿಯಾಗಿ ವಾರದಲ್ಲಿ 3 ದಿನ ಮೊಟ್ಟೆ ಹಾಗೂ 200 ಎಂ.ಎಲ್. ಕೆನೆಭರಿತ ಹಾಲನ್ನು ನೀಡಲಾಗುತ್ತಿದೆ. |

| | | |
|---|---|---|
| | | • ತೀವ್ರ ಅಪೌಷ್ಟಿಕ ಮಕ್ಕಳಿಗೆ ಅಪೌಷ್ಟಿಕ ಮಕ್ಕಳ ವೈದ್ಯಕೀಯ ವೆಚ್ಚ ಯೋಜನೆಯಡಿ ಔಷಧಿ ಹಾಗೂ ಚಿಕಿತ್ಸಾ ಆಹಾರಕ್ಕಾಗಿ (Therapeutric food) ಪ್ರತಿ ಮಗುವಿಗೆ ವಾರ್ಷಿಕ ರೂ.2000/- ಗಳಂತೆ ವೆಚ್ಚ ಭರಿಸಲಾಗುತ್ತಿದೆ.<br>• ಆರೋಗ್ಯ ಇಲಾಖೆಯ ಸಹಯೋಗದಿಂದ ಪೌಷ್ಟಿಕ ಪುನರ್ವಸತಿ ಕೇಂದ್ರ (NRC) ಗಳಲ್ಲಿ ಅಪೌಷ್ಟಿಕ ಮಕ್ಕಳಿಗೆ ಚಿಕಿತ್ಸೆ ನೀಡಲಾಗುತ್ತದೆ.<br>• ಮಕ್ಕಳಲ್ಲಿ ಅಪೌಷ್ಟಿಕತೆಯನ್ನು ತಡೆಗಟ್ಟುವ ನಿಟ್ಟಿನಲ್ಲಿ ಇಲಾಖೆಯು ಕೈಗೊಂಡ ಕ್ರಮಗಳಿಂದ ರಾಜ್ಯದಲ್ಲಿ ತೀವ್ರ ಅಪೌಷ್ಟಿಕ ಮಕ್ಕಳ ಸಂಖ್ಯೆಯಲ್ಲಿ ಕಳೆದ 3 ವರ್ಷಗಳಲ್ಲಿ ಗಮನಾರ್ಹವಾದ ಇಳಿಕೆ ಉಂಟಾಗಿದ್ದು, ಶೇ. 0.40 ರಿಂದ ಶೇ. 0.19 ಕ್ಕೆ ತಲುಪಿರುತ್ತದೆ. |
| ಆ. | ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳ ಬೆಳವಣಿಗೆಗಾಗಿ ಸರ್ಕಾರ ಖರ್ಚು ಮಾಡಿರುವ ಹಣವೆಷ್ಟು? | ಅಪೌಷ್ಟಿಕತೆಯಿಂದ ಬಳಲುತ್ತಿರುವ ಮಕ್ಕಳ ಬೆಳವಣಿಗೆಗಾಗಿ ಸರ್ಕಾರದಿಂದ ಅಂದಾಜು ಒಟ್ಟು ರೂ. 2127.44 ಲಕ್ಷಗಳನ್ನು ವೆಚ್ಚಮಾಡಲಾಗಿದೆ. |

(ಶಶಿಕಲಾ ಅಣ್ಣಾಸಾಹೇಬ್ ಜೊಲ್ಲೆ)

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಮತ್ತು ವಿಕಲಚೇತನರ

ಹಾಗೂ ಹಿರಿಯ ನಾಗರೀಕರ ಸಬಲೀಕರಣ ಸಚಿವರು.

ಸಂಖ್ಯೆ: ಮಮಇ 229 ಐಸಿಡಿ 2020

## ಅನುಬಂಧ

**ರಾಜ್ಯದಲ್ಲಿ ಅಪೌಷ್ಠಿಕತೆಯಿಂದ ಬಳಲುತ್ತಿರುವ ಮಕ್ಕಳ ಜಿಲ್ಲಾವಾರು ಮಾಹಿತಿ:**

| ಕ್ರ: ಸಂ | ಜಿಲ್ಲೆಗಳ ಹೆಸರು | ಅಪೌಷ್ಠಿಕ ಮಕ್ಕಳ ಸಂಖ್ಯೆ |
|---|---|---|
| 1 | ಬೆಂಗಳೂರು ನಗರ | 106 |
| 2 | ಬೆಂಗಳೂರು ಗ್ರಾಮಾಂತರ | 17 |
| 3 | ಬೆಳಗಾವಿ | 862 |
| 4 | ಬಳ್ಳಾರಿ | 787 |
| 5 | ಬೀದರ್ | 61 |
| 6 | ವಿಜಯಪುರ | 257 |
| 7 | ಬಾಗಲಕೋಟೆ | 262 |
| 8 | ಚಾಮರಾಜನಗರ | 90 |
| 9 | ಚಿತ್ರದುರ್ಗ | 281 |
| 10 | ಚಿಕ್ಕಮಗಳೂರು | 206 |
| 11 | ಚಿಕ್ಕಬಳ್ಳಾಪುರ | 120 |
| 12 | ದಾವಣಗೆರೆ | 222 |
| 13 | ಧಾರವಾಡ | 104 |
| 14 | ದಕ್ಷಿಣ ಕನ್ನಡ | 42 |
| 15 | ಗದಗ | 313 |
| 16 | ಕಲಬುರ್ಗಿ | 628 |
| 17 | ಹಾಸನ | 108 |
| 18 | ಹಾವೇರಿ | 663 |
| 19 | ಕೊಪ್ಪಳ | 89 |
| 20 | ಕೋಲಾರ | 96 |
| 21 | ಕೊಡಗು | 46 |
| 22 | ಮಂಡ್ಯ | 138 |
| 23 | ಮೈಸೂರು | 180 |
| 24 | ರಾಯಚೂರು | 705 |
| 25 | ರಾಮನಗರ | 107 |
| 26 | ಶಿವಮೊಗ್ಗ | 271 |
| 27 | ತುಮಕೂರು | 169 |
| 28 | ಉತ್ತರ ಕನ್ನಡ | 267 |
| 29 | ಉಡುಪಿ | 71 |
| 30 | ಯಾದಗಿರಿ | 392 |
| | **ಒಟ್ಟು** | **7660** |